# ಕವನ ಸರಣಿ

# ಒಣಜಂಬ

‘ನೀನು ಬರಿಯ ಸೋಮಾರಿ,
ನನಗೆ ಇರುವ ಕುಶಲಕರ್ಮ ನಿನಗೆ ಬಾರದೇತಕೆ
ನನ್ನ ಶಿಸ್ತು, ಕಾಲಕ್ರಮ ನಿನಗೆ ಅರಿಯದೇತಕೆ
ಇನಿತು ಸಣ್ಣ ದೇಹದಲ್ಲಿ ಎನಿತೊ ಕೆಲಸ ನಡೆಸಿಹೆ
ನೀನು ಬರಿಯ ಜಂಬದಣ್ಣ, ದೊಡ್ಡ ದೇಹ ದಂಡಕೆ
ನನ್ನ ಜನುಮಕಿದೋ ತಿರೆ
ನಿನಗು ಹುಟ್ಟು ಇದೇ ಇಳೆ
ನೋಡು ಎಂಥ ತಾರತಮ್ಯ, ಬರಿಯ ಅಳತೆ ವ್ಯರ್ಥವೆ
ನಿನಗು ಹಿರಿದು ಆನೆ, ನೀನೆ ಅದನು ಹಿಡಿವವ
ಅಳತೆಯಲ್ಲಿ ನೀನೆ ಹಿರಿಯ ನನಗೆ
ನಿನ್ನ ನಡೆಸೆ ನಾನೆ ಬೇಕು; ನಾನು ಸಾಕು
ಮೃಗಶಕ್ತಿಗೆ ಬೆಲೆಯು ಸೊನ್ನೆ
ಬೆರಳಿನಲ್ಲಿ ನನ್ನನೆತ್ತಬಲ್ಲೆ ನೀ
ಅಪ್ಪಳಿಸಲು ನೆಲಕೆ ನುಚ್ಚುನೂರು ನಾ
ಮೃಗಶಕ್ತಿಗೆ ಬೆಲೆಯು ಸೊನ್ನೆ
ನಿನ್ನ ನಡೆಸೆ ನಾನೆ ಬೇಕು
ನೀನು ದಿನವ ಕಳೆಯೆ ನಾನೆ ಬೇಕು
ಕೆಲಸಬೊಗಸೆ ಸಿನಿಮ ಊಟ
ಕ್ರಮದಿ ನಡೆಯೆ ನಾನು ಬೇಕು.
ನಾನಿಲ್ಲದೆ ನೀ ಸತ್ತೆ
ಮೆದುಳಿಲ್ಲದ ಬೂದು ಕತ್ತೆ ’
ಗಡಿಯಾರವು ಕೊಚ್ಚುತಿತ್ತು ಬರಿಯ ಜಂಬ.

ಮನುಜನೆದುರು ಮೇಜಮೇಲೆ ಕುಳಿತು
ಟಿಕ್ ಟಿಕ್ ಟಿಕ್ ಎಂದು ಗೊಣಗು ಮಾತಿನಲ್ಲಿ
ನರನ ತನಗೆ ಹೋಲಿಸುತ್ತ
ತನ್ನ ಹಿರಿಮೆ ಹಾಡುತಿತ್ತು.
ಕೆಲಸದಲ್ಲಿ ಮಗ್ನನಾಗಿ ಮನುಜ ಮರೆತ ಕೀಲಿ ಕೊಡಲು
ತ್ರಾಣವಳಿದು ಉಸಿರು ನಿಂತು ಪ್ರಾಣಹೋಯ್ತು ಗಡಿಯಾರಕೆ
ಕೊನೆಯಾಯಿತು ಮಿತಿಯಿಲ್ಲದ ಜಂಬಕೆ

# ಜನವರಿ ೧. ೧೯೫೧

ಕಳೆಯಿತಿದೊ ಮೊದಲರ್ಧ ಶತಮಾನ
ವಿಪ್ಲವವೆ ಬಸಿರಾದ ಯುಗದ ನೆಲೆಯಲ್ಲಿ.
ಬುವಿಯ ಸೊಗವಿನ ಗುಡಿಯ ಹಾಳು ಕಾಡಾಗಿಸಿದ
ಮಹದುಗ್ರ ಸಂಗ್ರಾಮವೆರಡ ಕಂಡಾಯ್ತು.
ಸುಖದ ತಳದಲಿ ನೋವು ಹುದುಗಿಕೊಂಡಿರುವಂತೆ
ಹಗಲ ನುಂಗಲು ರಾತ್ರಿ ಕಾದು ಕೂತಿರುವಂತೆ
ಶಾಂತಿಯಾ ಬಸಿರಿನಲೆ ಯುದ್ಧವೂ ಇಹುದೆಂಬಂತೆ
ಸಿದ್ಧವಾಗುತ್ತಲಿದೆ ಮತ್ತೊಂದು ಯುದ್ಧಕ್ಕೆ ಬುದ್ಧಿ ; - ಕತ್ತೆಯ ಲದ್ದಿ.

ರಶಿಯದೇಶದ ಶಿಲ್ಪಿ ಲೆನಿನ ಮೂಡಿಸಿಹನಗೊ
ಹೊಸ ಬಗೆಯ ಸಮಾಜ ವಿರಚನೆಯ.
ತಿರೆಯೆಲ್ಲ ಹರಡಲಿಕೆ ಹವಣಿಸಿದೆ
ರೈತ ಕೂಲಿಗಳ ಆಳುವಿಕೆ.
ಹಣ ಹೆಣ್ಣು ಮಣ್ಣಿನಾ ಬಯಕೆಯಲಿ,
ಮತಾಂಧತೆಯ ಕತ್ತಲಲಿ,
ರಣಕಹಳೆ ಮೊಳಗಿಹುದು ಇತಿಹಾಸದಲ್ಲಿ.
ತತ್ವಪಸರಣೆಗಾಗಿ ರಣ ನಡೆವ ಕುರುಹಿಹುದು ಇಂದು.
ಸುಖ ನಲಿವುಗಳ ಹೊನಲು ಹರಿಯುತಿಹ ಅಮೆರಿಕಾ
ಧನವನಾರಾಧಿಸಿದೆ ;
ಧನವೆ ದೇವರೆನುತಿದೆ.

## ಹೊಸ ಹಾಡು

ರಶಿಯದಲಿ ದುಡಿಯುವುದೆ ದೈವ,
ಸರ್ವಸಮತೆಯೆ ಧ್ಯೇಯ.
ಧನ - ದುಡಿಮೆ ಕೂರಾದ ಮಚ್ಚಿನಲಿ ಹೋರುತಿವೆ;
ಐಶ್ವರ್ಯ – ಸಮತೆಗಳು ಸುತ್ತಿಗೆಯ ಚಚ್ಚುತಿವೆ ಒಬ್ಬರೊಬ್ಬರಿಗೆ.
ಸಿಡಿಮದ್ದು ಅಣುಬಾಂಬು ಜಲಜನಕಬಾಂಬು
ಬುವಿಯನ್ನು ಕವಿಯುವಾ ದಿನವೆಂದೊ? ಎಂದು
ಬೆದರಿ ಬಸವಳಿದಿಹುದು ಜಗದ ಜನತೆಯ ಗಡಣ.

ಮುತ್ತು ರತುನದ ರಾಶಿ, ಧನ ಕೋಟಿ ಅರ್ಥವಿಲ್ಲದ ನಿದ್ರೆಗೈಯುತಿವೆ
ಕೆಲವು ಎಡೆಗಳಲಿ;
ದಿನವ ಕಳೆಯಲು ಕಾಸ ಕಾಣದೆಯೆ ನರಳುವರು ಹಲವು ಕಡೆಗಳಲಿ.
ಹಲವು ಆಗಾರದಲಿ ಉಣಿಸು ಬರಿ ಕೊಳೆಯುತಿದೆ;
ಲಕ್ಷ ಜನ ಉಣಿಸಿರದೆ ಹಸಿವಿನಲಿ ನರಳುವರು.
ಕೆಲವು ನಾಡುಗಳಲ್ಲಿ ಧಾನ್ಯ ಬಹು ಹೆಚ್ಚೆಂದು ಕಡಲೊಳಗೆ
ಎಸೆಯುವರು;
ಹಲವು ದೇಶಗಳಲ್ಲಿ ಗಂಜಿಯೂ ಕಾಣದೆಯೆ ಸಾಯುವರು.
ಎಂಥದಿದು ವೈಷಮ್ಯ! ಏಕೆ ಬಂತೀ ವಿರಸ!
ಮುಗಿವೆಲ್ಲಿ? ಮುಗಿವೆಂದು? ಹಾದಿಯೆತ್ತ?

ವಿಜ್ಞಾನ ಸಾಧಿಸಿದೆ ನೂರು ಸುಖಸಾಧನವ:
ರೈಲು ಕಾರು ವಿಮಾನ
ಪಯಣಸುಖ ಬೆಳೆಸಿಹವು,
ಜಗವೆ ಕಿರಿದಾಗಿಹುದು;
ಇನಿ ಸಿನಿಮ ರೇಡಿಯೊ ಟೆಲಿವಿಷನ್ನು
ಕೋಟಿ ಜನಗಳ ನಿತ್ಯ ಉಲ್ಲಸದಿ ತಣಿಸಿಹುದು, ಕುಣಿಸಿಹುದು.

# ಹೊಸ ಹಾಡು

ಒರಟು ಹಚ್ಚಡ ಹೋಗಿ, ನವುರಾದ ಉಡುಪಿಹುದು ಎಲ್ಲರಿಗು.
ವಿದ್ಯುತ್ತು
ನೂರು ಸುಖ ಸಾಧನವ, ನೂರಾರು ಅನುಕೂಲ ಕಲ್ಪಿಸಿದೆ.
ವಿಜ್ಞಾನಯುಗದಲ್ಲಿ ಸಾಮಾನ್ಯ ಮಾನವನು
ಆಳಿದ ಶತಮಾನಗಳ ಸಾರ್ವಭೌಮರಿಗಿಂತ
ಮಿಗಿಲಾದ ಅನುಕೂಲ ಸುಖಿಸುತಿಹನು.
ಇಂದಿನೀ ಯುಗದಲ್ಲಿ ಎಲ್ಲ ಇವೆ! ಎಲ್ಲ ಇವೆ!
ಶಾಂತಿ ಹಿತ ತೃಪ್ತಿ ;—ಇವು ಮಾತ್ರ ಇಲ್ಲ.

ಹಿಂಸೆಯಿಂ ತತ್ತರಿಸೆ ಜಗ
ಅಹಿಂಸೆಯನು ಬೋಧಿಸಲು ಐತಂದ ;
ಉಗ್ರ ಸಂಗ್ರಾಮಗಳು ತಿರೆಯ ತಲ್ಲಣಿಸಿರಲು
ಶಾಂತಿಯಮೃತವ ನೀಡಿ ಗಾಂಧಿಯೈತಂದ ;
ಅಹಿಂಸೆಯೀ ಚಳುವಳಿ ಕ್ರಾಂತಿಸಾಧನವೆಂದು ತೋರಿಸಿಯೆ
ರಾಜಕಾರಣದಿ ಹೊಸ ಹಾದಿಯನು ಕಲ್ಪಿಸಿದ ;
ತಿರೆಗೆಲ್ಲ ಅರಿವಾಯ್ತು ; ಬೆರಗಾಯ್ತು.

ರಾಜಕಾರಣದಿ ಕೊಳೆ ಕಳೆಯೆ ಹೆಣಗಿದ ಗಾಂಧಿ.
ಸುರಗಾನ ಹಾಡಿದಾ ಭವ್ಯಾತ್ಮ ಠಾಕೂರ.
ಸೀಮೆಯಿಲ್ಲದ ವಿಶ್ವ ಅರಳುತಿದೆ, ಎಂದರಿತ ಐನ್‌ಸ್ಟೈನ್.
ಮಾನವನ ಸಾಧನೆಯು ಮುಗಿದಾಯ್ತು,
ಮುಂದಿನದ ಸಾಧಿಸಲು ದೇವಮಾನವ ಬೇಕು ;
ಎಂದಂದ ವೇದಾಂತಿ ಅರವಿಂದ.
ನರಶ್ರೇಷ್ಠರಿವರೆಲ್ಲ ಬಾಳಿದರು ಉರುಳಿದೀ ಪರ್ವದಲಿ.
ಇಂಥ ಪುಂಗವರನ್ನು ಹೆರಲೆನಿತು ಶತಮಾನ ಕಾಯಬೇಕೀ ಪೃಥಿವಿ !

## ಹೊಸ ಹಾಡು

ಕಿರೀಟಗಳುರುಳಿಹವು, ಉರುಳುತಿವೆ.
ನಾಡಿನುನ್ನತಿಗಾಗಿ ಸರಕಾರ ಬಯಸುವುದು ಬಹು ಹಣವ ;
ಎಲ್ಲಿಂದ ತರಬೇಕು ?
ಇಲ್ಲದರ ಮೇಲೆಲ್ಲ ತೆರಿಗೆ ಹಾಕಾಯ್ತು ;
ಉಳಿದಿಹರು ಇರುವವರು,-
ಅವರ ಮೇಲೂ ಬಿತ್ತು ಹಿರಿ ತೆರಿಗೆಗಳ ಭಾರ.
ರಾಜರುಗಳುರುಳಿದರು ;
ಹಿರಿಯ ನೆಲದೊಡೆಯರೂ ಉರುಳುತ್ತಲಿಹರು ;
ಹಣವಂತ ಗಣವೆಲ್ಲ ತೆಳ್ಳಗಾಗುತ್ತಲಿದೆ.
ಸಮತಾಸಮಾಜಕ್ಕೆ ಹಾದಿ ಹಸನಾಗುತಿದೆ.

ನಾಗರಿಕ ಮಾನವನು ಬುವಿಯ ಕೊನೆಗಳನೆಲ್ಲ ಕಂಡಾಯ್ತು,
ಕಾಣದುದು ಇನ್ನಿಲ್ಲ.
ಕೊಂಪೆ ಕೊಂಪೆಗಳಲ್ಲಿ ನಾಡುಗಳ ಬಾವುಟಗಳೇರಿದವು ;
ಮಂಜುಗಡ್ಡೆಯ ನೆಲದ ಶೀತವಲಯಕು ಕೂಡ ಕಚ್ಚಾಟವಾಯ್ತು.
ಅಧಿಕಿಸುವ ನಾಡವರ ನೆಲೆವೀಡಿಗಾಗೆಂದು ನೆಲಗಳನು ಗೆಲ್ಲಲಿಕೆ
ಜರ್ಮನಿಯು ಯುದ್ಧಗಳನೆರಡನ್ನು ಹೂಡಿಯಾಯ್ತು.
ಯೂರೋಪು ಕಬಳಿಸಿತು ಮಿಕ್ಕೆಲ್ಲ ಖಂಡಗಳ ;
ದಲಿತ ರಾಷ್ಟ್ರಗಳೆಲ್ಲ ಕಣ್ದೆರೆದು, ವಿಪ್ಲವವನೇಳಿಸಲು,
ಯೂರೋಪರಾಕ್ಷಸನು ಹಿಂಸರಿದ.
ಆದಿತ್ಯ ಮುಳುಗದಾ ಚಕ್ರಾಧಿಪತ್ಯದಲಿ
ರವಿ ಮೂಡದಂತಾಯ್ತು.
ಶತಮಾನಗಳ ದಾಸ್ಯಶೃಂಖಲೆಯ ಕಿತ್ತೆಸೆದು
ಭಾರತವು ಬಿಡುಗಡೆಯ ಹೊಸ ಉಸಿರ ಉಸಿರಿಹುದು.

## ಹೊಸ ಹಾಡು

ಇಂಡೊನೇಷಿಯ ಚೀನ
ಸ್ವಾತಂತ್ರ್ಯ ಕಹಳೆಗಳ ಮೊಳಗಿ ಇಹವು.
ಆಕ್ರಮಣಕೆಡೆಯಿಲ್ಲ ಇನ್ನು ಧರೆಯಲ್ಲಿ ;
ದಲಿತ ರಾಷ್ಟ್ರಗಳಿರವು ವಸಾಹತಿಗಾಗಿ.
ಚಂದ್ರ ಮಂಗಳರನ್ನು ಆಕ್ರಮಿಸ ಬಯಸಿರುವ ಮಾನವನು
ರಾಕೆಟ್ಟುಗಳನಿಂದು ಕಳಿಸತೊಡಗಿಹನು ;
ಮಾನವನ ಕೈಸಿಕ್ಕಿ ಬುವಿಯಿದುಗೋ ಸುಡುಗಾಡು !
ಗ್ರಹಗಳನು ಕೆಡಿಸಲಿಕೆ ಹೆಣಗುತಿಹನೀ ಮಂಗ.

ಅನಿಲ ವೇಗದ ಪ್ರಗತಿ,
ವಿಪ್ಲವ ಪರಂಪರೆಯು,
ಇಂಥ ಹಿರಿ ಸಾಧನೆಯು,
ಇಂಥ ಪರಿವರ್ತನೆಯು,
ಅರ್ಧ ಶತಮಾನದಾ ಅತ್ಯಲ್ಪ ಕಾಲದಲಿ
ನಡೆದಿಲ್ಲ ಬುವಿಯ ಇತಿಹಾಸದಲ್ಲಿ.
ಈ ವೇಗ ಇನ್ನಾವ ವೇಗಕ್ಕೆ ಎಡೆಗೊಟ್ಟು
ಭೂಗ್ರಹವು ಅಳಿಯುವುದೊ, ಎನುವ ಸಂಶಯವಾರಿ
ಮನವ ತಲ್ಲಣಿಸುತಿದೆ ಈ ಪರ್ವ ದಿನದಲ್ಲಿ.

# ಆ ಹಾಡು

ತುಙ್ಗ ನದಿ ನಗುನಗುತ ಮೆಲಿತು ಹರಿಯುತಲಿತ್ತು.
ಸಞ್ಜೆ ರವಿ ಬಾನ್ದಳದಿ ಮುಳುಗಿ, ಕೆಞ್ಗದಿರುಗಳ
ನದಿ ನೀರ ಮೇಲ್ ಸೂಸಿ ಚೆಲುವಿಸಿದ.
ಅರಳೆವೋಡದ ತುಣುಕು ಬಾನಿನಲಿ ತೇಲಿದುದು
ಬಣ್ಣಗಳ ಉಡುಪುಟ್ಟು ಸೊಗಯಿಸಿತು.
ನದಿಯ ಒದಿ ಬಾಗಿದ್ದ ಹಸಿರು ತರುವಿನ ಮೇಲೆ
ಕುಳಿತ ಕೋಗಿಲೆ ಹಾಡ ಹಾಡಿತಗೊ,-
ಕುಹೋ ಕುಹೋ, ಎನ್ದು.

ಆ ದನಿಯ ಈ ಹಾಡ ಕೇಳಿದ್ದೆ ಹಲವು ಸಲ.
ಸನಿಹದಲಿ ನಿನ್ತು ನಾ ಕೇಳಿದೆನು ಕೋಗಿಲೆಯ,-
ಹಳೆಯ ಹಾಡಿದು ಸಾಕು, ಹೊಸ ಹಾಡ ಹೇಳೆನ್ದು.
ಮತ್ತೆ ಮೂಡಿತು ಅದುವೆ 'ಕುಹೋ' ಎನುವ ದನಿ.

'ನಿನಗೆ ಬಹುದೊನ್ದೆ ನುಡಿ; ಬೇರೆ ಹಾಡೇ ಅರಿಯೆ.
ಹೊಸಹಾಡ ಹಾಡುವೆಯೊ, ಹಾಡೊನ್ದ ಹಾಡು.
ಹಳೆ ಹಾಡ ಹಾಡುವಿಯೊ, ಸಾಕಾಯ್ತು ಹೋಗು'

ಉತ್ತರವ ತರುವವೊಲು ದನಿಯಿತದೊ ಕೋಗಿಲೆಯು
ಕುಹೋ ಕುಹೋ, ಎನ್ದು;
ರೆಕ್ಕೆಗಳ ಪಟಪಟಿಸಿ ಹಾರಿಹೋಯಿತು ದೂರ.
ಸಞ್ಜೆಗೆವ್ಪಾರಿತ್ತು; ಕತ್ತಲೆಯು ಕವಿದಿತ್ತು;

## ಹೊಸ ಹಾಡು

ಬಣ್ಣಗಳ ಮುಗಿಲಿಲ್ಲ; ನದಿಯ ನಗು ಮಿಂಚಿಲ್ಲ.
ಕೋಗಿಲೆಯ ಕುಹೂರವ ಮನದಿ ಗುಯ್‌ಗುಡುತಿತ್ತು.
ಇನಿ ದನಿಯು ಆ ಸೊಮ್ಪು ಮಧುಮಧುರ, ಕಿವಿಗಿಮ್ಪು.
ಮೌನವೆತ್ತೆತ್ತಲೂ ಪಸರಿ ಪಸರುತ್ತಿರಲು
ಮನದಿ ಮರುದನಿ ನುಡಿವ ಕೋಗಿಲೆಯ ಆಯಿಮ್ಪು
ಹಳೆ ಹಾಡು ಆದೇನು, ಹೊಸಹಾಡು ಆದೇನು ;
ಎನ್ದನ್ದು ನಿನ್ತೆ ನಾ ನೆನೆದು ಆ ನುಣ್ದನಿಯ.

# ಅಮರ ಗಾಂಧಿ

ಎಲ್ಲರಂತೊಬ್ಬನೊಲು ಬೆಳೆದು
ಬೆಳೆಯೆ ಹೈಮಾಚಲದವೋಲಾದೆ
ಒಳಬೆಳಕ ಸೆಲೆಯಿಂದ.
ಎಲ್ಲರೊಲು ಮಣ್ಣಮೈ ಮನುಜನಾಗಿದ್ದವನು
ಎಡೆಬಿಡದ ಸಾಧನೆಯು ಬಲದಿಂದ
ದೇವತ್ವದುನ್ನತಿಗೆ ಏರಿದವ್ಯತವಾದೆ.
ಹೆರರ ದಬ್ಬಾಳಿಕೆಗೆ ಉರಿದ
ನಾಲ್ವತ್ತು ಕೋಟಿ ಜನ ಭಾರತೀಯರ ಮೇಲೆ
ಗೆಲವ ಹಿಮಕಣ ಸುರಿದ ಮೇರುಪರ್ವತವಾದೆ.
ಹಿಂಸೆಭೂತದ ಬವಣೆಯಲಿ ನರಳಿ,
ಬೆಂದು ಬರಡಾಗಿರುವ ಬುವಿಯಲ್ಲಿ
ಬಿಡುಗಡೆಯ ಕಾಳೆಗಕೆ ಅಹಿಂಸೆಯಸ್ತ್ರವನು ಬೋಧಿಸಿದ ಬುದ್ಧ!
ಪ್ರಾರ್ಥನೆಗೆ ನಡೆದಿರಲು
ಹಿಂಸೆ ಮೈವೆತ್ತಂತೆ ಬಂದೊಬ್ಬ
ನಿನ್ನ ಕೊಲೆಗೈದಿರಲು
ಸಾಕ್ರೆಟಿಸ ಕ್ರಿಸ್ತರೊಲು ಅಮರನಾದೆ.

## 'ಚರಕಾ ಚಲಾ ಚಲಾಕೇ..........'

ಸ್ವಾತಂತ್ರ್ಯ ಚಳುವಳಿಯ ವೀರ ಯೋಧರ ತಂಡ
ಬಂಧನಕೆ ಗುರಿಯಾಗಿ ಜೈಲಿನಲಿ ಕೊಳೆತಿತ್ತು.
'ಸ್ವಾತಂತ್ರ್ಯ ದಿನ'ದಂದು ಜೈಲ ಪೌಳಿಯ ಒಳಗೆ
ನಾಡಬಾವುಟ ಮೆರೆಸಿ, ಸಭೆ ನಡೆಸಬೇಕೆಂದು
ಇಂಟರ್ನಿ[1]ಗಳ ತಂಡ ಆಕಾಂಕ್ಷಿಸಿತ್ತು.
ಜೈಲಕಟ್ಟಳೆ ಇದಕೆ ವ್ಯತಿರಿಕ್ತವಾಗಿತ್ತು.
ವಾರ್ಡರು[2]ಗಳೇ ಬಂದು ಬೇಡೆಂದು ವಾರಿಸಲು
ಜಗ್ಗದೆಯೆ ಇಂಟರ್ನಿಗಳು ಸಭೆಯು ನೆರೆಯೆ,
ಸೂಪರಿಂಟೆಂಡೆಂಟು ಫೋನು ಮಾಡಿದರಾಗ
ಡೀ ಎಸ್ಪಿ[3] ನೆರವನ್ನು ಕೂಡಲೆಯೆ ಬಯಸಿ.
ಜೈಲ ಬಳಿ ಬುರ್‍ರೆಂಬ ಸೀಳ್ ಸದ್ದು ಕೇಳಿ ಬರೆ,
ಪೋಲೀಸುಪಡೆ ತುಂಬಿ ವಾನು[4] ಬಂದಿತು, ಎಂದು
ಅರಿಯಿತಾ ಸಭೆ ನೆರೆದ ಇಂಟರ್ನಿಗಳ ತಂಡ;
ಬೋಲೊ ಭಾರತ್ ಮಾತಾಕಿ ಜೈ, ಎಂದು
ಘೋಷಣೆಗಳೇರಿದವು ಆಗಸವ.
ವಿಘ್ನ ಬಹ ಮೊದಲೆ ಬಾವುಟವನೇರಿಸಲು
ತವಕಿಸಿತು ನೆರೆದಿದ್ದ ಬಂಧಿತರ ಗುಂಪು.
ವಾಲಂಟಿಯರ ಧೀರ ದಳಪತಿಯು ಸಿಳ್ಳಿಸಲು
ಯೋಧರೊಲು ನಿಂತರಗೊ ಇಂಟರ್ನಿಗಳ ತಂಡ

---

1 Internee
2 Warder
3 D. S. P.
4 Van

ಬಾವುಟದ ಸುತ್ತಲೂ, ರಕ್ಷೆಯೀಯುವ ತೆರದಿ.
ಪೋಲೀಸು ಬೂಟುಗಳ ಸದ್ದು ಹತ್ತಿರವಾಯ್ತು.
ಬಾವುಟವ ಹಾರಿಸಲು ದಳಪತಿಯು ಕೈ ನೀಡಿ
ಕಂಬಕ್ಕೆ ಕಟ್ಟಿದ್ದ ಹಗ್ಗವನು ಹಿಡಿದೆಳೆದ.
'ಕಟ್' ಎಂದು ಏಟೊಂದು ಬಿತ್ತವನ ಕೈಗೆ
ಪೋಲೀಸುಲಾಠಿಯಾ ಬೀಸುವಿಕೆಯಿಂದ.
ಹಾರೆಹಾರಿತು ಒಡನೆ ಮೂರು ಬಣ್ಣದ ಧ್ವಜವು
ಬೀಸಿ ಬಹ ಗಾಳಿಯಲಿ ಪಟಪಟಿಸಿ ದನಿದು,
ಇಂಟರ್ನಿಗಳ ತ್ಯಾಗ ಧೈರ್ಯ ಸೂಚಿಯ ತೆರದಿ.

ಡೀ ಎಸ್ಪಿ 'ಯಸ್' ಎಂದು ಕೈಯೆತ್ತೆ
ಮೊದಲಾಯ್ತು ಧಪಧಪನೆ ಲಾಠೀಪ್ರಹಾರ.
ಪೋಲೀಸರೇಟಿನಲಿ ಬಂಧಿತರ ಕೈಮುರಿದು,
ತಲೆಯೊಡೆದು, ಎಲುಬುಗಳು ಸೀಳಿದವು.
ಉಕ್ಕಿ ಚಿಮ್ಮಿತು ರಕ್ತ ಬಂಧಿತರ ಮೈನೆನೆಯೆ.
ಬಿದ್ದವರ ಮೈಮುರಿಯೆ ಹೊಡೆಹೊಡೆದು ಹಾಕಿದರು,
ಓಡುವರ ಬೆನ್ನಟ್ಟಿ ದನದಂತೆ ಚಚ್ಚಿದರು,
ಅಡಗಿಹರ ಹೊರಗೆಳೆದು ನೆತ್ತರನು ಸುರಿಸಿದರು
ರಣಧೀರ ಪೋಲೀಸರು ;
ಬರಿಗೈಯ ಬಂಧಿತರ ಮೈಮುರಿಯ ಚಚ್ಚಿದರು
ರಣಧೀರ ಪೋಲೀಸರು ;
ಇಂಟರ್ನಿಗಳ ಸಭೆಯು ಚದುರಿಸಾಯ್ತು ;
ಕಂಬವನು ಕಿತ್ತೆಸೆದು, ಬಾವುಟವ ಸೆಳೆದಾಯ್ತು ;
ಇಂಟರ್ನಿಗಳನೆಲ್ಲ ಸೆಲ್ಲು*ಗಳ ಕೂಪದಲಿ ಕೂಡಿಯಾಯ್ತು ;

* Cell

# ಹೊಸ ಹಾಡು

ಸೆಲ್ಲುಗಳ ಬಾಗಿಲಿಗೆ ಬೀಗ ಜಡಿದಾಯ್ತು.
ಹಿಂಸೆಯೀ ಸಮರದಲಿ ಕ್ಷಣಿಕವಹ ಹೊರಗೆಲುವು ಮೃಗಶಕ್ತಿಗೇ.

ರಾತ್ರಿ ಕಳೆಯಿತು, ಬೆಳಗು ಹರಿದಿತ್ತು.
ಪ್ರತಿ ಸೆಲ್ಲ ಬಾಗಿಲಿನ ಮುಂದುಗಡೆ
ಕಾವಲಿಹನೊಬ್ಬೊಬ್ಬ ಪೋಲೀಸನು.
ಇಂಟರ್ನಿಗಳ ನಿತ್ಯವಿಧಿಗೆಂದು ಸೆಲ್ಲು ಬಾಗಿಲು ತೆರೆಯೆ
ಒಬ್ಬೊಬ್ಬ ಹೊರಟನಾ ಹೊರಗುಕಡೆಗೆ.
ಕಾವಲಲಿ ಕೂತಿದ್ದ ರೀಜರ್ವಪೋಲೀಸ
'ಚರಕಾ ಚಲಾ಼ ಚಲಾಕೇ,
ಲೇಂಗೇ ಸ್ವರಾಜ್ಯ ಲೇಂಗೆ'
ಎಂದು ಗುಣುಗುಣಿಸಿದ್ದ.
ಸ್ವಾತಂತ್ರ್ಯಯೋಧರಹ ತಮ್ಮ ಗೀತೆಯನಿದನು
ತಮ್ಮ ತುಳಿಯಲೆ ಬಂದ ಪೋಲೀಸ ಹಾಡುವುದ
ಕೇಳಿದಾ ದಳಪತಿಯು ದುರುದುರನೆ ನೋಡಿದನು ಪೋಲೀಸನ.
ಪೋಲೀಸ ಹೇಳಿದನು 'ಸಂಜೆಯಲಿ ಹೊಡೆದವರು ಬೇರೆ ಜನ.
ನಾವೀಗ ಬಂದಿಹುದು ಬರಿಯ ಕಾವಲಿಗೆಂದು.
ನಿಮ್ಮಂಥವರ ಹೊಡೆವ ಪಾಪ ನಮಗೇಕೆ!'

ನಿನ್ನೆ ದಿನ ಬಂಧಿತರ ಹೊಡೆಹೊಡೆದು ಬಳಲಿದ್ದ
ಪೋಲೀಸ ಬಹುವಾಗಿ ಹಸಿದಿದ್ದ;
ಬಂಧಿತರು ತಮ್ಮೂಟದಲಿ ಪಾಲುಕೊಡಲೆಂದು
ಪೋಲೀಸುಬಾಯಿಯಲಿ ಸವಿ ಮಾತು ಜಾರಿತ್ತು.

# ವಸುದೇವ್ ಭೂಪಾಲಂ

'ವಸುದೇವ್ ಭೂಪಾಲಂ !

ಎಂಥ ಸಿಗ್ಗಿನ ಕುಳಿ ನೀವು !
ನಿಮ್ಮ ನಾಚಿಕೆ ಹೆಣ್ಣಿಗೇ ಸಿಗ್ಗು ತರುವಂಥಹದು.
ನೇರ ನಿಟ್ಟಿಸಿದೆ ನಿಮ್ಮ ದೆಸೆ ;
ದಿಟ್ಟಿಯನು ಚೆಲ್ಲಿದಿರಿ, ನನ್ನ ಕಡೆಯಲ್ಲ, ನೆಲದ ಎಡೆ ;
ಸಿಗ್ಗುಕುಳಿ ನೀವೆಂದು ಬಲ್ಲೆ,
ಇಲ್ಲದಿರೆ ನಾ ಬೆದರಿ ಬೆಪ್ಪಾಗಿ ಕುಸಿಯುವುದೆ !

ಮತ್ತೊಮ್ಮೆ ನಿಮ್ಮ ದೆಸೆ ದಿಟ್ಟಿಸಿದೆ ;
ತುಟಿ ತೆರೆದು ನಸು ನಕ್ಕೆ ;
ನೋಡದೊಲು, ದಿಟ್ಟಿಯನು ಚೆಲ್ಲಿದಿರಿ, ನನ್ನ ಕಡೆಯಲ್ಲ, ನೆಲದ ಎಡೆ.
ಸಿಗ್ಗುಕುಳಿ ನೀವೆಂದು ಅರಿಯದಿರೆ,
ರೂಪವತಿ ನಾನೆಂದು ಅರಿಯದಿರೆ,
ಮೊಕ ಮುರಿದು ಕುಸಿಯುವುದೆ ನಾ !

ಹಣ್ಣುಕೊಳ್ಳುತ ನಿಂತಿದ್ದಿರೆಂದು ;
ಸನಿಹವೇ ನಾ ಬಂದು ಮಾತನಾಡಿಸಿದೆ.
ಕೇಳದೊಲು, ದಿಟ್ಟಿಯನು ಚೆಲ್ಲಿದಿರಿ, ನನ್ನ ಕಡೆಯಲ್ಲ, ನೆಲದ ಎಡೆ.
ಚೆಲುವೆ ನಾನೆಂದು ಅರಿಯದಿರೆ,
ನಿಮ್ಮೊಲವು ನನ್ನಲ್ಲಿ ಸುಳಿದಿಹುದ ಅರಿಯದಿರೆ,
ಮೊಕ ಮುರಿದು ಕುಸಿಯುವುದೆ ನಾ.

ಏನೇನು ಭಾವಿಸಲಿ ಹೆರವರೆಲ್ಲ,
ನಾ ಬಲ್ಲೆ ಸಿಗ್ಗುಕುಳಿ ನೀವೆಂದು.
ವಸುದೇವ್ ಭೂಪಾಲಂ !
ಎಂಥ ಸಿಗ್ಗಿನ ಕುಳಿ ನೀವು
ನಿಮ್ಮ ನಾಚಿಕೆ ಹೆಣ್ಣಿಗೂ ಸಿಗ್ಗು ತರುವಂಥಹುದು.'

# ಭಿಕ್ಷುಕಿ

ಮೊಗ ಬಾಡಿ ಜೋತಿತ್ತು
ತಲೆ ಕೆದರಿ ನಿಮಿರಿತ್ತು
ಕೊಳಕು ಹಚ್ಚಡ ತುಂಬಿದೆದೆಯ ಮರೆಮಾಡಿತ್ತು
ಸೊರಗಿದ್ದ ಎಳೆಯ ಮಗು ಸೊಂಟದಲಿ ಮಲಗಿತ್ತು.
ತರುಣನೊಬ್ಬನ ದಿಟ್ಟಿ ತನ್ನ ಮೇಲ್ ಸುಳಿದಿಹುದ
ಕಂಡು ಭಿಕ್ಷುಕಿಯ ಮುಖ ಅರಳಿ ಸೊಗಸಾಯ್ತು ;
ಕರಿಯ ಕಣ್ ಮಿಂಚಿದವು
ತುಟಿ ಅರಳಿ ಬಿಳಿಹಲ್ಲು ಮಿನುಗಿ ನಗುತಿತ್ತು.
ನಾ ಮೊದಲು ಬಗೆದಂತೆ ರೂಪವಿಹುದಿವಳಲ್ಲಿ
ಹೊಟ್ಟೆಗಿಲ್ಲದೆ ಸೋತು ಬಾಡಿರುವಳು ;
ಎಂದರಿತ ಬಸ್ಸಿನಲಿ ಕೂತಿದ್ದ ಹರೆಯದವ.
ಬೇಡಿ ಫಲವಿಲ್ಲದೆಯೆ ಸೋತು ಎದೆಗುಂದಿದ್ದ
ಭಿಕ್ಷುಕಿಯು ಚಿಮ್ಮಿದಳು ನೆಟ್ಟದಿಟ್ಟಿಯ ಎಡೆಗೆ.
ಕಾಸನೂ ಕೊಡದಿರಲು ಬೇರೆ ಜನ
ತರುಣನಿವ ಆಣೆಯನು ತೆಗೆದವಳಿಗಿತ್ತ.
ಹಿಗ್ಗಿದಳು ಹೂವಾಗಿ ;
ಸೊಬಗಿಡಿದ ನಗೆಗಣ್ಣು ದಿಟ್ಟಿಸಿದವವನನ್ನು
ಮತ್ತೇನು ಹೇಳೆಂದು ಕೇಳಿ ಕಾದಿಹ ತೆರದಿ.
ಬಳಿಯ ಕಟ್ಟೆಯ ಮೇಲೆ ಕುಳಿತವಳ ನಗೆಗಣ್ಣು
ಅವನನಾವರಿಸಿತ್ತು ಬಸ್ಸು ಹೊರಟಾಗ.

*  *  *  *

ಹಲವು ದಿನ ಉರುಳಿದವು ;
ಈ ಸಂಜೆ ಬಸ್ಸಿನಲಿ ಹಿಂಬಂದ ಆದೆ ತರುಣ ;
ಸನಿಹದಲೆ ಜನ ಸೇರಿ ನಿಂತಿಹುದ
ನೋಡಿ ಅವನೂ ನಡೆದ ಆಯೆಡೆಗೆ.
ಹಸಿವಿನುರಿಯಲಿ ಬೆಂದು ಅಸುವ ನೀಗಿದ್ದ
ಭಿಕ್ಷುಕಿಯ ಹೆಣ ನೆಲವನೊರಗಿತ್ತು.
'ಮುದಿಸಿರುವ ಹರೆಯದವರೆಸಿತೊ ಇಹ ಊರಿನಲಿ
ಚೆನ್ನುಳ್ಳ ಹೆಣ್ಣೊಂದ ಸಲಹಲಾರೂ ಬರನೆ!'
ಚಿಂತಿಸಿದ, ಉಗುಳು ನುಂಗಿದ ತರುಣ.
ಹೆಣದ ಕೈಮುಷ್ಟಿಯನು ಜನ ಬಿಡಿಸಿ ನೋಡುವೊಡೆ
ಒಂದಾಣೆ ಅಲ್ಲಿತ್ತು ತಣ್ಣಗಾಗಿ.
'ಎಂಥ ಭಿಕ್ಷುಕಿ ಇವಳು!
ಆಣೆಗೂ ಉಣಿಸುಣದೆ ಹಸಿದು ಸತ್ತಿಹ ಬೆಪ್ಪಿ!'
ಎನಲು ಜನ, ನಿಟ್ಟುಸಿರ ತೀಡಿದನು ತರುಣ.
ಸನಿಹದಲಿ ಅಳುತಿದ್ದ ಭಿಕ್ಷುಕಿಯ ಎಳೆಕೂಸ
ರಕ್ಷಣಾಲಯಕಿತ್ತು ಕೈ ತೊಳೆದುಕೊಂಡ.

# ಕವಿ

ಗುಂಗುರು ಕೂದಲು
ಶಾಂತವಾದ ಕಣಸುಗಣ್ಣು
ಸದಾ ಗಂಭೀರ
ಆಲೋಚನಾ ಮುಖಮುದ್ರೆ
ಏನು ಯೋಚಿಸಿರುವನೋ ಅವನಿಗೂ ಅರಿಯದು.

ಸೂಟು ತೊಟ್ಟು ಬರುವನೊಮ್ಮೆ
ಒಮ್ಮೆ ಬರಿಯ ಜುಬ್ಬ
ಬುಷ್‌ಕೋಟು, ಷರ್‌ವಾನಿ, ಟೈ ಒಮ್ಮೆ ಒಮ್ಮೆ
ಸಂಜೆ ತಂಪಿನಲ್ಲಿ ಕಾರಿನಲ್ಲಿ ಸಾಗುವ
ಸುಡುವ ಬಿಸಿಲಿನಲ್ಲೆ ಬೆವರಿ, ದಣಿದು ನಡೆಯುವ.

ಕವಿಯೆಂದರೆ ಎಲ್ಲರಿಗೂ ಗೊತ್ತು ;
ಅವನಿಗೆ ಎಲ್ಲರೂ ಗೊತ್ತು, ಯಾರೂ ಗೊತ್ತಿಲ್ಲ.
ರಸ್ತೆಯಲ್ಲಿ ನಡೆಯುತಿರಲು ವಂದಿಸುವರು ಹಲವರು ;
ಇವನೋ ಕೈ ಎತ್ತಿದರೆ ಎತ್ತಿದ, ಇಲ್ಲದಿರೆ ಇಲ್ಲ ;
ಮರುನಕ್ಕರೆ ನಕ್ಕ, ಇಲ್ಲದಿರೆ ಇಲ್ಲ.
ಜಂಬವೆಂದು ತಿಳಿಯುವರು
ಮತ್ತೆ ಸಿಕ್ಕಿದಾಗ ಮಾತನಾಡರು ;
ಬೆಳೆಯಿತು ವೈಷಮ್ಯದ ತೆರೆ.
ಕವಿ ಕಣಸುಗಾರನೆಂದು

ಶತ್ರುಮಿತ್ರ ಭೇದವವಗೆ ಇಲ್ಲವೆಂದು,
ಅರ್ಥವಿಲ್ಲದ ನಡೆವಳಿಕೆ ಅವಗೆ ಒಲ್ಲದೆಂದು
ಅವರಿಗೇನು ಗೊತ್ತು.

ವಿದ್ಯೆ ಜ್ಞಾನ ಕೀರ್ತಿ ಧನ ಎಷ್ಟು ಇದ್ದರೂ
ಮಗುವ ಮನಸು, ತಿಳಿಯ ತಿಳಿವು.
ಕವಿಯೆಂದರೆ ಮಕ್ಕಳೆಲ್ಲ ಓಡಿ ಬರುವರು ;
ಅವನೆ ಮಿಠಾಯಿಯೆಂಬಂತೆ ಹಿಗ್ಗಿ ನಲಿವರು ;
ಅವನೂ ಮಗುವೆಂಬಂತೆ ಅವರ ನಡೆವಳಿ.

ಕವಿಯ ಕಂಡು ಹೆಣ್ಗಳೆಲ್ಲ ಆಸೆಪಡುವರು.
ಅವಗೂ ಪರಿಚಯ ಹುಡುಗಿಯರ ಹಿಂಡು ;
ಬರಿಯ ಮಾತನಾಡುವನೋ
ಏನು ಏನು ಮಾಡುವನೋ
ಅವನಿಗೇ ಗೊತ್ತು, ಅವರಿಗೇ ಗೊತ್ತು.
ಬಹು ಸಂಯಮಿ, ಅಂಥವನಲ್ಲ ; ಎನುವರು ಹಲರು
ಮಹಾ ರಸಿಕ, ಬಿಡುವನೆ ; ಎಂಬರು ಕೆಲರು
ಚೆಲುವ ಹೆಣ್ಣು ಸಿಗಲು ಸವಿವುದೇ ಸರಿ ! ಎನುವರೂ ಉಂಟು.

ಮಗುವಿನಂಥ ಮನಸು, ಲಹರಿ ;
ಮುದುವರಲೂ ಕಾಣವಂಥ ತಿಳಿವು, ನಡೆವಳಿ.
ಎಲ್ಲರಿಗೂ ತಿಳಿಯುವುದು ಅವಗೆ ತಿಳಿಯದು
ಯಾರಿಗೂ ಅರಿಯದುದು ಅವಗೆ ಅರಿವುದು.
ಅತಿ ಗಭೀರ ; ನಗಲು ಬಾರದೋ !
ನಕ್ಕನೆಂದರೆ ಕಣ್ಣಲಿ ನೀರು ಬರುವವರೆಗು ನಗುವನು.
ಗಡಸು ಎಂದು ಮಾತು, ಹೆಸರು ;

# ಹೊಸ ಹಾಡು

ತುಸುವ ನೋವ ಕಂಡರೂ ಕಂಬನಿಯನು ಮಿಡಿಯುವ.
ಅತಿ ವಿನೀತ, ಬಹು ನಿದಾನ
ಎಂಥ ಜೋರು, ಅಬ್ಬ ದುಡುಕು!
ಗುಡುಗು ಹೌದು, ಸಿಡಿಲು ಹೌದು
ಹುವ್ವಿನಂಥ ಹೃದಯ ಹೌದು.

ಬಹು ನಾಚಿಕೆ, ಬಹು ಧೈರ್ಯ
ಅತಿ ಗಭೀರ, ಅತಿ ಸರಸ
ಬಹು ದೂರ, ಬಹು ಹತ್ತಿರ.
ನಕ್ಕರೆ ನಕ್ಕೇ ಬಿಡುವ
ಅತ್ತರೆ ಅತ್ತೇ ಬಿಡುವ
ಸುಮ್ಮನಿದ್ದರೆ ಕಲ್ಲುಕಂಬವೆ ಸರಿ.
ಯಾವುದು ಸರಿ ? ಯಾವುದಲ್ಲ ?
ಲಹರಿ ಹರಿದಂತೆ ವರ್ತಿಸುವ.
ಹೂವು ತಿಂದು, ಹಾಲು ಕುಡಿದು, ಜೇನ ಸವಿದು
ಬೆಳೆದಂತೆ, ಬಳೆದಂತೆ ತೋರುವ;
ಕಲ್ಲುತಿಂದು, ಮುಳ್ಳು ನೆಕ್ಕಿ ಬದುಕಿದಂತೆ ನಡೆಯುವ.

ನದಿಯ ತಳವೊ
ಕಡಲ ಅಡಿಯೊ
ಇಂಥವರಿಗೆ ಪಾಲು.
ಕಾಡೊ ಮೇಡೊ
ಸನ್ಯಾಸವೊ
ಕೊನೆಗೆ ದೊರೆವ ಠಾವು.
ರಾಜಕೀಯಕಿಳಿದರೆ
ತಪ್ಪು ಭಾವಿಸುವ ಜನ ಗುಂಡಿನಿಂದ ಕೊಲ್ಲುವುದೆ.

# ಕೊಲೆಯ ಕಳಸ

ಕುಪ್ಪಳಿಸಿತು ಕಾಂಗರೂ
ಆಫ್ರಿಕಾದ ತೀರದಿಂದ ಇಂಡಿಯಾದ ತೀರಕ್ಕೆ.
ಮೈಯ ಮೇಲೆ ಹೊತ್ತಭಾರ ಎಲುಬಿನೊಂದು ಗೂಡು ;
ಕೊಂಚ ಮಾಂಸವಂಟಿಕೊಂಡ ಗಾಂಧಿಯೆಲುಬ ಗೂಡು.
ಕಡ್ಡಿಯಂಥ ಕೈಯಿ ಕಾಲು ;
ಪುಟ್ಟ ತಲೆ ; ಪುಟ್ಟ ಮುಖ ;
ಹೃದಯ ದೊಡ್ಡದು,
ಅವನ ಹೃದಯ ದೊಡ್ಡದು.
ಕಿವಿಯು ಬಾಗಿ, ಬಚ್ಚ ಬಾಯಿ ;
ಮೈಗೆ ಎರಡು ಬಟ್ಟೆತುಂಡು ;
ನಡೆಯಲಾರ ; ಊರುಗೋಲು ಬೇಕು.
ಪಾಂಡಿತ್ಯದ ಗಂಧವಿಲ್ಲ ;
ಕಲೆಯ ಚೆಲುವ ಬಲೆಯೆ ಒಲ್ಲದು.
ವಾಗ್ಮಿಯಲ್ಲ ; ಚೆಲುವನಲ್ಲ ;
ಕಡ್ಡಿಯಂಥ ಕೈಯಿ ಕಾಲು ;
ಹೃದಯ ದೊಡ್ಡದು ;
ಅವನ ಹೃದಯ ದೊಡ್ಡದು.
ನಾಡು ಮೊಳಗಿ ಕರೆಯಿತು ;
'ಬಾರ ಗಾಂಧಿ, ಬಾರ ಗಾಂಧಿ.
ಹೃದಯ ದೊಡ್ಡದು; ನಿನ್ನ
ಮನಸು ದೊಡ್ಡದು.'

ಸಾವಿರಾರು ಮೈಲಿ ದೂರದಿಂದ ಬಂದ
ಆಂಗ್ಲರಡಿಯ ದಾಸಳಾಗಿ ನರಳುತ್ತಿರೆ ಭಾರತಿ,
ಸಂಕೋಲೆಯ ಬಿಗಿ ಹಿಡಿತದಿ ಕೊರೆಯುತಿರಲು ಕೈಗಳು,
ದಾದಭಾಯಿ ಗೋಖಲೆ
ಬೆಸೆಂಟ್ ದಾಸ ತಿಲಕರು
ಹೆಣಗುತ್ತಿರೆ ಶ್ರಮಿಸುತ್ತಿರೆ ಬಂಧನವನು ಬಿಡಿಸಲು,
ಬಂಗಾಳದ ಕಾಳಿಭಕ್ತ ಕ್ರಾಂತಿವೀರರು
ದಾಸ್ಯಕೂಪವನ್ನು ತಮ್ಮ ಮೆಯ್ಯನೆತ್ತರಿಂದ ತುಂಬಿ
ಹೊನಲನೀಸೆ ಯತ್ನಿಸುತಿರೆ,
ಗಾಂಧಿ ಬಂದ, ಗಾಂಧಿ ಬಂದ!
ಅಹಿಂಸೆಯಸ್ತ್ರಹಿಡಿದು, ಮೆಲಿತು ಮಾತನಾಡಿ,
ಗಾಂಧಿ ಬಂದ, ಗಾಂಧಿ ಬಂದ!

ಮೌನವಾಯ್ತು ನಾಡು; ಶಾಂತವಾಯ್ತು ಪಾಡು.
ದಾಸ ಮೋತಿಲಾಲ ಕೂಡಿ
'ಆಫ್ರಿಕಾದ ವೀರ,
ಅಹಿಂಸೆಯಸ್ತ್ರವಾಧಾರ,
ಶಾಂತಿ ದೂತ, ಸತ್ಯಪೂತ'
ಎಂದು ಒಸಗೆ ಹಾಡಲು,
ಹಿರಿಯ ನಾಡು ಭರತಭೂಮಿ
ಒಕ್ಕೊರಲಿನಾಳಿನಂತೆ
ಮರುಧ್ವನಿಯಗೈದಿತು;
ಗಾಂಧಿ ಜೈ ಜೈ ಯೆಂದು ಮರುಧ್ವನಿಯ ಗೈದಿತು.

## ಹೊಸ ಹಾಡು

ಚಂಪರಣ್ಯ ಅಸಹಕಾರ
ದಂಡಿ ಕ್ವಿಟ್ ಇಂಡಿಯಾ
ಚಳುವಳಿಗಳ ಕರ್ತೃವಾಗಿ,
ಮೂರು ದಶಕ ಭಾರತಕ್ಕೆ ಧೀರ ಮುಂದಾಳುವಾಗಿ
ಕೋಟಿ ಜನದ ಕಣ್ಣಿನಲ್ಲಿ ದೇವನಾಗಿ ದೈವವಾಗಿ
ಬುದ್ಧನೆಂದು ಕ್ರಿಸ್ತನೆಂದು
ನಾಡ, ಮನೆಯ, ಎದೆಯ ಬೆಳಗೆ ಬಂದ ಜ್ಯೋತಿಯೆಂದು
ಜನದ ಕೋಟಿ ಗಡಣದಲ್ಲಿ
ಹಿಮಾಚಲದ ಶಿಖರವಾದೆ.
ಮೋಸ ತಂತ್ರ ಕಪಟ ಕಲಹಗಳಿಗೆ
ಬೀಡೆನಿಸಿದ ರಾಜಕೀಯ ರಂಗದಲ್ಲಿ
ಸತ್ಯ ಧರ್ಮ ನ್ಯಾಯಗಳನು ನೆಲೆಗೊಳಿಸಲು ಹೆಣಗಿ,
ಘೋರ ರಕ್ತಬಲಿಯ ಕುಡಿವ ಸ್ವಾತಂತ್ರ್ಯ ಕಾಳಿಗೆ
ಅಹಿಂಸೆಯೆಂಬ ಅಮೃತ ಕುಡಿಸಿ, ದೇವಿಯಾಗಿಸಿ
ಒಲಿಸಿಕೊಂಡ ಶಾಂತನೈ !
ಪ್ರಶಾಂತ ಧೀರನೈ !

ಕ್ರಿಸ್ತನುಸಿರ ಅಮರವಾಣಿ
ಹುಲುಜನರಿಗೆ ಸಹ್ಯವಿರದೆ
ಕ್ರಿಸ್ತನನ್ನು ಶಿಲುಬೆಗೆತ್ತಿ, ಮಳೆಯ ಹೊಡೆದು, ಕೊಂದರು.
ಕ್ರಿಸ್ತನುಸಿರ ನುಡಿಯು ಅಮೃತ.
ಸುಧೆಯ ನೀಡೆ ಹೊನ್ನ ಕಲಶವಾಯ್ತು
ಏಸುವಿನ ಕೊಲೆ.
ಏಸುವಮರ ವಾಣಿಗಿಂತ
ಪಾಪಿಜನರು ಪುಣ್ಯಾತ್ಮನ ಕೊಂದರೆಂದು

ಜನದ ಮನಸಿನಲ್ಲಿ ಶೋಕ ನಿಂತು
ಏಸುವನ್ನು ಆದರಿಸಿದರು.
ಅಂಥ ಭಾಗ್ಯ ಗಾಂಧಿಗಿಲ್ಲವೆಂದು ಕೊರಗುತಿದ್ದೆ.
ಒಂದು ಸಂಜೆ, ಬಂತು ಸುದ್ದಿ ;
ಬಾನುಲಿಯಿಂ ಬಂದ ಸುದ್ದಿ ;–
'ಪ್ರಾರ್ಥನಾಸಭೆಯ ಮಧ್ಯೆ
ಗೋಡ್ಸೆ ಗುಂಡಿನಿಂದ ಗಾಂಧಿಯನ್ನು ಕೊಂದ'ನೆಂದು.
ಸಮಾಧಾನದಿಂದ ಉಸಿರುಗರೆದೆ.
ಹುಲ್ಲಿನಂಥ ಮನುಜನೊಬ್ಬ
ಬೆಟ್ಟದಂಥ ಜೀವವನ್ನು ಕೊಂದರೂನು,
ಕೊಲೆಗಡಕನು ಜುಡಾಸ್‌ನಂಥ ಪರಮ ಪಾಪಿಯೆಂದು
ಲೋಕ ಬಗೆದರೂನು,
ಸಮಾಧಾನದಿಂದ ಉಸಿರುಗರೆದೆ.

ಮೂರು ದಶಕ ಭಾರತಕ್ಕೆ ಧೀರಮುಂದಾಳುವಾಗಿ
ರಾಜಕೀಯದಲ್ಲಿ
ಅಹಿಂಸೆಯಸ್ತ್ರ, ಅಸಹಕಾರಗಳನು
ಲೋಕಕೆಲ್ಲ ಕಲಿಸಿಯಾಯ್ತು.
ಸ್ವಾತಂತ್ರ್ಯ ಬಂದಮೇಲೆ,
ನಾಡ ನಡೆಸೆ ಗಾಂಧಿತತ್ವ ಸಲ್ಲದೆಂದು
ಗಾಂಧಿಜೀಯ ಪಟ್ಟಶಿಷ್ಯರೆಲ್ಲ ನಿರ್ಧರಿಸಲು,
ಜನವೆಂದಿತು, 'ಗಾಂಧಿ ಯುಗವು ಮುಗಿಯಿತು.
ಸ್ವಾತಂತ್ರ್ಯಯುದ್ಧಕ್ಕೆ ಗಾಂಧಿ ಸೇನಾಪತಿ.
ಸ್ವಾತಂತ್ರ್ಯ ಬಂದಮೇಲೆ ಗಾಂಧಿ ಯುಗವು ಮುಗಿಯಿತು.
ಗಾಂಧಿ ಕೆಲಸ ಮುಗಿಯಿತು.'

ಜನದ ಮನದ ಬಿಂಬದಂತೆ
ಖೂಳನೊಬ್ಬ ಬಂದು
ನಮಸ್ಕಾರನಟನೆ ಮಾಡಿ
ಗುಂಡಿನಂಥ ಕಠಿಣವಸ್ತುವನ್ನು
ತರಗಿನಂಥ ಗಾಂಧಿ ದೇಹದಲ್ಲಿ ಹೊಗಿಸೆ,
'ಹರೇ ರಾಮ್ ! ಹರೇ ರಾಮ್ !'
ಅಸ್ತನಾದ ಗಾಂಧಿಪುರುಷ.

ಭಾರಿ ಬೆಟ್ಟದಂಥ ಗಾಂಧಿ ಬಾಳಿಗೆ
ಕೊಲೆಯು ಕೊನೆಯು ಹೊನ್ನ ಕಳಸದಂಥ ಶಿಖರ.
ಹಿರಿಯ ವ್ಯಕ್ತಿಯೊಬ್ಬನನ್ನಲ್ಲದೆ
ಸಾದಸಾದಾ ತೆರದ ಜನಕೆ
ದೂರ ದೂರದಿಂದ ಬಂದ ಮಂದಿ
ಒಳಸಂಚನೆ ಮಾಡಿ, ಪ್ರಾಣದಾಸೆ ತೊರೆದು,
ಕೊಲೆಯ ಕಠಿಣ ಕೃತ್ಯದಲ್ಲಿ ತೊಡಗಲುಂಟೆ.
ಬದುಕಿನಲ್ಲಿ ಗಾಂಧಿಯೆಂಥ ಹಿರಿಯನೋ
ಮರಣದಲ್ಲಿ ಅಂಥ ಹಿರಿಯನೇ !



# ಭೂಪಾಲಂ ಸಾಹಿತ್ಯ

ಕತೆ :

ಸಿಡಿಲು
ಒಲವಿನ ಉಪವನ

ನಾಟಕ :

ತ್ರಿಶೂಲ
ಕುಮ್ಮಟ ವಲ್ಲಭ
ಕಾಲೇಜ್ ಹುಡುಗಿ

ಪ್ರಬಂಧ :

ಗೊಂಚಲ್ ಮಿಂಚು
ಸ್ವಾತಂತ್ರ್ಯ ವೀರರು

ಕವಿತೆ :

ಹೊಸ ಹಾಡು
ಪ್ರಳಯ ದುಂದುಭಿ
ರಂಜನ

ಶಿಶುಗೀತೆ :

ಹೂ
ಹಹ್ಹಹಾ
ಗುಮ್ಮ ಬಂತು

# ವಸುದೇವ್ ಭೂಪಾಲಂ ಕೃತ

## 'ರಂಜನ'

ಶ್ರೀ ವಸುದೇವ್ ಭೂಪಾಲಂರವರ ಕಾವ್ಯಸಂಗ್ರಹ ರಸ, ಭಾವ, ಸೌಂದರ್ಯ, ಶಕ್ತಿ, ಆವೇಶ, ಆದರ್ಶ ಇವೆಲ್ಲವುಗಳ ಸಾರಸರ್ವಸ್ವ; ಮನಮೋಹಕ ಆನಂದದಾಯಕ ಕಾವ್ಯಸೃಷ್ಟಿ. ಕಲಾವಿದನ ಶಿಲ್ಪ, ಗಾಯಕನ ಲಯ, ನಟರಾಜನ ಕುಣಿತ, ನಿಸರ್ಗ ದೇವತೆಯ ನಿರ್ಮಲಗೀತೆ ಇವೆಲ್ಲ ಇಲ್ಲಿವೆ. ಪ್ರತಿಭಾಸುಂದರ ಸಮನ್ವಿತ ಕವನ ಪರಿಚಯ ಪಡೆದಾಗ

ಏನು ಆಶ್ಚರ್ಯ! ಭೂಪಾಲಂನ ಮಾತೇಂ
ಸವಿಯೋ ಸುಂದರವೋ ಸತ್ಯವೋ

ಅನ್ನಿಸದೆ ಇರದು.

ಟಿ. ಟಿ. ಶರ್ಮ: 'ವಿಶ್ವಕರ್ಣಾಟಕ'

ಕವಿಹೃದಯ ಎಷ್ಟು ವಿಶಾಲವಾದುದೆಂಬುದಕ್ಕೆ ಈ ಪುಸ್ತಕ ಸಾಕ್ಷಿ. ಪ್ರತಿಯೊಂದು ಕವನದಲ್ಲಿಯೂ ಕವಿಯ ಸರಳತೆ, ಸಹಜವಾದ ಶೈಲಿ ಒಡಮೂಡಿದೆ. ಶ್ರೀ ವಸುದೇವ್‌ರ ಕವಿತಾಶಕ್ತಿ ಅಗಾಧವಾದುದು.

'ಉಷಾ'

........ಗೀತಗಳು ಸೊಗಸಾಗಿವೆ. ಎಷ್ಟು ಸಾರಿ ಓದಿದರೂ ಬೇಸರವೆನಿಸುವುದಿಲ್ಲ.

'ವಾಣಿ'

ಭಾವ, ಪದಜೋಡಣೆ, ಛಂದಸ್ಸಿನ ಓಟ ಎಲ್ಲ ಸೊಗಸಾಗಿ ಹೆಣೆದುಕೊಂಡಿವೆ........ ಉಪಮಾನಗಳು ಓದುಗರ ಮನಸ್ಸಿಗೆ ಆಶ್ಚರ್ಯ ಹರ್ಷಗಳನ್ನು ತರುತ್ತವೆ.

'ಕತೆಗಾರ'

'ರಂಜನ' ಬರೀ ಒಂದು ಕ್ಷಣದ ರಂಜನವಲ್ಲ. ಜೀವನಕ್ಕೆ ಜೀವಸತ್ವವಾದ ರಂಜನ.

ರಂ. ಶ್ರೀ. ಮುಗಳಿ.

## ‘ಪ್ರಳಯದ ದುಂದುಭಿ’

ಚೆಲುವನ್ನು ರಂಜಿಸಿ, ವಸುದೇವ್ ರಸಿಕರ ಮನ ಸೆಳೆದರು. ಈಗ ಅವರು ನಗ್ನಸತ್ಯದ ಆರಾಧಕರಾಗಿ ಅದರೆಡೆಗೆ ರಸಿಕರ ಚಿತ್ತವನ್ನು ಆಕರ್ಷಿಸಿದ್ದಾರೆ........ಶಬ್ದಗಳು ಕನ್ನಡದ ಶೈಲಿಯಲ್ಲಿ ಹೊಸ ಸೃಷ್ಟಿಯನ್ನು ಅರಗಿಸುವ ಹದಣಿಕೆಯನ್ನು ತೋರಿಸುತ್ತವೆ. ಜನತೆಯ ಪರವಾಗಿ ಈ ಕವನ ಸಂಗ್ರಹವನ್ನು ಸ್ವಾಗತಿಸುತ್ತೇನೆ.

ವಿ. ಕೆ. ಗೋಕಾಕ್.

........ಈ ಕವನಗಳು ಹೊಸಹಾದಿಯನ್ನು ತುಳಿದಿವೆ. ಹೊಸ ಸೃಷ್ಟಿಯನ್ನು ಆಹ್ವಾನಿಸಿವೆ. ಕಾವ್ಯದ ಮೈಕಟ್ಟಿನಲ್ಲಿ ಹೊಸ ತಂತ್ರವನ್ನು ಅನುಸರಿಸಿಕೊಂಡು ಬಂದಿವೆ.

‘ಜನಪ್ರಗತಿ’

## ‘ಸಿಡಿಲು’

‘ಸಿಡಿಲು’ ಕಥಾಸಂಗ್ರಹದಲ್ಲಿರುವ ಆರು ಕತೆಗಳೂ ಉನ್ನತ ಶ್ರೇಣಿಯವು. ಇವು ಕವನದಲ್ಲಿ ನೈತಳದ ಕತೆಗಳು. ಈ ಕತೆಗಳಲ್ಲಿ ಎದೆ ಕರಗಿಸುವ ಕರುಣೆಯುಂಟು; ಮಣ್ಣಿನ ಬಾಳಿಗೆ ಹೊನ್ನಿನ ಬೆಲೆ ತರುವ ಪ್ರೇಮದ ಜಾದುಗಾರಿಕೆಯ ಬಣ್ಣನೆಯುಂಟು; ಎದೆ ತೋಯಿಸಿ ಹೃದಯ ಸ್ವಚ್ಛಮಾಡುವ ಪಶ್ಚಾತ್ತಾಪದ ಕಂಬನಿಯುಂಟು; ಇವುಗಳೆಲ್ಲ ಸುತ್ತಿ ಬಳಸಿ, ಅಲ್ಲಿ ಇಲ್ಲಿ ನಿಂತು ಕಣ್ಣುಮುಚ್ಚಾಲೆಯಾಡುವ ಚೆಲುವಿನ ಗಾರುಡಿಯ ಬಣ್ಣನೆಯುಂಟು.

‘ಒಡೆದ ಕನ್ನಡಿ’ ಲೇಖಕರ ಶಬ್ದ ಭಂಡಾರದ ವ್ಯಾಪ್ತಿಯನ್ನೂ ಭಾವವೈಶಾಲ್ಯವನ್ನೂ ಕಲ್ಪನಾಚತುರತೆಯನ್ನೂ ವ್ಯಕ್ತಪಡಿಸುತ್ತದೆ. ‘ದೆವ್ವದ ಮನೆ’ಯಲ್ಲಿ ಪ್ರೇತಗಣದ ಹುಚ್ಚು ಕುಣಿತದ ಉನ್ಮಾದ ಭೀಕರತೆಗಳ ಬಣ್ಣನೆಯ ನಡುವಿನಲ್ಲಿ ಪಥಿಕನೊಬ್ಬನನ್ನು ತಂದು ಚೆಲ್ಲಿ, ವಿಚಿತ್ರ ಪರಿಣಾಮಕಾರಿಯಾದ ಕತೆಯನ್ನು ಹೆಣೆಯಲಾಗಿದೆ. ‘ಸಿಡಿಲು’ ಕತೆಯಲ್ಲಿ ಶೈಲಿಗೆ ಅನುವಾದ ವಸ್ತುವಿದೆ. ಕತೆಯನ್ನು ಕೊಂಡೊಯ್ದಿರುವ ಮಾರ್ಗವೂ ಹಿತವಾಗಿದೆ. ಒಂದೊಂದು ಪುಟವೂ ಕೊನೆಯ ದುರಂತವನ್ನು ಇದಿರಿಸಲು ವಾಚಕರ ಮನಸ್ಸನ್ನು ಸಿದ್ಧಗೊಳಿಸುತ್ತದೆ.

ಕವಿಗಳು ಕತೆಗಾರರೂ ಆದರೆ, ಕವಿಯ ಲೇಖನಿಗೆ ಕತೆಗಾರಿಕೆಯ ಬಿನ್ನಾಣವೂ ಬಂದಿದ್ದರೆ ಏನು ಕಾಣಬಹುದೋ ಅವನ್ನೆಲ್ಲ ಕಾಣಬಹುದಿಲ್ಲಿ, ಈ ಕತೆಗಳಲ್ಲಿ.

‘ವಿಶ್ವಕರ್ಣಾಟಕ’



## ವಸುದೇವ್ ಭೂಪಾಲಂ !

ರೋಮಾಂಚಕವಾದ ಗಭೀರವಾದ ಹೆಸರು. ‘ಸಿಡಿಲು’ ‘ಕುಮ್ಮಟಿ ವಲ್ಲಭ’ಗಳನ್ನು ಓದಿದವರಿಗೆ ಕಲ್ಪನೆಯೂ, ಕೃತಿಯೂ ರೋಮಾಂಚಕವೆಂದೂ ಗಭೀರವೆಂದೂ ಅರಿವಾಗದಿರದು.

ಬಾಲ್ಯಾರಭ್ಯ ಲೇಖನದಲ್ಲಿ ಉದ್ಯುಕ್ತರಾದಿವರು ಸಾಹಿತ್ಯದ ಸರ್ವ ವಿಧದಲ್ಲೂ ಕೃತಿವಂತರಾಗಿದಾರೆ, ಯಶೋವಂತರಾಗಿದಾರೆ. ಪುಸ್ತಕವಾಗಿರುವುದು ಕೆಲವಾದರೆ ವಿವಿಧ ಪತ್ರಿಕೆಗಳಲ್ಲಿ ಹರಡಿರುವುದು ಹಲವು ಹಲವು. ಕೈಯಿಟ್ಟ ಪ್ರಕಾರದಲ್ಲೆಲ್ಲ ನೂತನತೆಯನ್ನು, ಅಸಾಧಾರಣತೆಯನ್ನು ಪ್ರಯುಕ್ತಿಸಿದಾರೆ ಯಶಸ್ವಿಯಾಗಿಸಿದಾರೆ. ಭೂಪಾಲಂರಿಗೆ ಸಾಹಿತ್ಯ ‘ಅರ್ಥಕೃತೇ’ ಅಲ್ಲ, ಅಲ್ಲ. ‘ಯಶಸೇ’ ಕೂಡ ಅಲ್ಲ. ಯಶೋಮಾರ್ಗವಾದ ರಾಜಕೀಯ ರಂಗಕ್ಕೆ ಮಾರುಹೋಗದೆ ಸಾಹಿತ್ಯಾನುಸರಣೆಯಲ್ಲಿ ಕೃತಕೃತ್ಯರಾಗಿದಾರೆ. ಸಾಹಿತ್ಯ ಪ್ರಕಾಶಕ್ಕೆ ನಿರುತ್ಸಾಹದಾಯಕವಾದ ಕರ್ಣಾಟಕ ಸನ್ನಿವೇಶವನ್ನು ಕಡೆಗಾಣಿಸಿ ಅಂತರ್ಮುಖಿ ವ್ಯಕ್ತಿತ್ವಕ್ಕೆ ಸಾಹಿತ್ಯಜೀವನ ವರವೆಂದು ಭಾವಿಸಿ, ಸಾಹಿತ್ಯತಪಸ್ವಿಯಾಗಿದಾರೆ.

ಆನಂದ್ ಬ್ರದರ್ಸ್ :: ಬೆಂಗಳೂರು ೨.